# ಕರ್ನಾಟಕ ವಿಧಾನ ಪರಿಷತ್ತು

1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1458
2 ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್
(ವಿಧಾನ ಸಭೆಯಿಂದ ಚುನಾಯಿತರಾದವರು)
3 ಉತ್ತರಿಸುವ ದಿನಾಂಕ : 19-03-2020
4 ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಮಹಾನಗರ ವ್ಯಾಪ್ತಿಯ ವಸತಿ ಪ್ರದೇಶಗಳಲ್ಲಿ ವಾಣಿಜ್ಯ ಚಟುವಟಿಕೆ ನಡೆಸಲು ಇರುವ ನಿಯಮಗಳೇನು; ವಸತಿ ಪ್ರದೇಶದಲ್ಲಿರುವ ಅನಧಿಕೃತ ಮಳಿಗೆ ಮುಚ್ಚಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಬೆಂಗಳೂರು ಮಹಾನಗರ ವ್ಯಾಪ್ತಿಯ ವಸತಿ ಪ್ರದೇಶಗಳಲ್ಲಿ 2015ರ ನಂತರ ಪ್ರಾರಂಭವಾಗಿರುವ ಕಟ್ಟಡಗಳಲ್ಲಿ ವಾಣಿಜ್ಯ ಚಟುವಟಿಕೆಯನ್ನು 40 ಅಡಿ ಅಗಲಕ್ಕಿಂತ ಜಾಸ್ತಿ ಇರುವ ರಸ್ತೆಯಲ್ಲಿ ಕಟ್ಟಿರುವ ಕಟ್ಟಡದ ಶೇ20% ರಷ್ಟು ಅಥವಾ 500 ಚದುರ ಅಡಿ ಮೀರದಂತೆ (ಯಾವುದು ಕಡಿಮೆ ಇದೆಯೋ ಅದನ್ನು ಪರಿಗಣಿಸಿ) ವಾಣಿಜ್ಯ ಚಟುವಟಿಕೆ ನಡೆಸಲು ಅವಕಾಶ ಕಲ್ಪಿಸಲಾಗಿರುತ್ತದೆ.. |
| ಆ | ಕೋರಮಂಗಲದ ವಸತಿ ಪ್ರದೇಶಗಳಲ್ಲಿ ವಾಣಿಜ್ಯ ಪರವಾನಿಗೆ ಪಡೆದು ವ್ಯವಹಾರ ನಡೆಸುತ್ತಿರುವ ಸಂಸ್ಥೆಗಳ ಸಂಖ್ಯೆ ಎಷ್ಟು; ವಾಹನ ನಿಲುಗಡೆ ಪ್ರದೇಶದಲ್ಲಿ ವಾಣಿಜ್ಯ ಚಟುವಟಿಕೆ ನಡೆಸುತ್ತಿರುವ ಸಂಸ್ಥೆಗಳ ವಿವರ ನೀಡುವುದು; | ಕೋರಮಂಗಲದ ವಸತಿ ಪ್ರದೇಶಗಳಲ್ಲಿ ವಾಣಿಜ್ಯ ಪರವಾನಿಗೆ ಪಡೆದು ವ್ಯವಹಾರ ನಡೆಸುತ್ತಿರುವ ಸಂಸ್ಥೆಗಳ ಸಂಖ್ಯೆ-42 ಆಗಿದ್ದು, ವಾಹನ ನಿಲುಗಡೆ ಪ್ರದೇಶದಲ್ಲಿ ವಾಣಿಜ್ಯ ಚಟುವಟಿಕೆ ನಡೆಸುತ್ತಿರುವ ಸಂಸ್ಥೆಗಳ ಸಂಖ್ಯೆ-6 ಆಗಿರುತ್ತದೆ. |
| ಇ | ಕೋರಮಂಗಲ / ಇಂದಿರಾನಗರ ವಸತಿ ಪ್ರದೇಶದಲ್ಲಿ ವಾಣಿಜ್ಯ ಪರವಾನಿಗೆ ನೀಡಿರುವುದರ ವಿರುದ್ಧ ನ್ಯಾಯಾಲಯಗಳಲ್ಲಿ ದಾಖಲಾಗಿರುವ ಪ್ರಕರಣಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | ಕೋರಮಂಗಲದ ವಸತಿ ಪ್ರದೇಶಗಳಲ್ಲಿ ವಾಣಿಜ್ಯ ಪರವಾನಿಗೆ ನೀಡಿರುವುದರ ವಿರುದ್ಧ ನ್ಯಾಯಾಲಯಗಳಲ್ಲಿ ದಾಖಲಾಗಿರುವ ಪ್ರಕರಣಗಳ ಸಂಖ್ಯೆ-2 ಆಗಿರುತ್ತದೆ. ಅವುಗಳೆಂದರೆ.<br>1. ಬ್ರೇಕ್ ಫಸ್ಟ್‌ಕ್ಲಬ್, W.P.NO.57920/2016 (LB-BMP)<br>2. ಶ್ರೀ ಶಿವಾಸ್ ತೃಪ್ತಿ, W.P.NO.22173/2019 (LB-BMP) |
| ಈ | ನ್ಯಾಯಾಲಯದಲ್ಲಿ ಪ್ರಕರಣ ದಾಖಲಾದ ಮೇಲೆ ವಾಣಿಜ್ಯ ವ್ಯವಹಾರ ನಡೆಸುವುದರ ಪರವಾಗಿ ಯಾವುದೇ ಆದೇಶ ಇರದಿದ್ದರೂ ವಾಣಿಜ್ಯ ವ್ಯವಹಾರ ನಡೆಸುತ್ತಿರುವ ಸಂಸ್ಥೆಗಳ ಮೇಲೆ ಸರ್ಕಾರ ಯಾವ ಕ್ರಮಕೈಗೊಂಡಿದೆ? | ನ್ಯಾಯಾಲಯದಲ್ಲಿ ದಾಖಲಾಗಿರುವ ಮೇಲ್ಕಂಡ ಪ್ರಕರಣಗಳಲ್ಲಿ ನ್ಯಾಯಾಲಯವು ಇನ್ನು ಯಾವುದೇ ಆದೇಶ ನೀಡಿರುವುದಿಲ್ಲ ಆದ್ದರಿಂದ, ಪಾಲಿಕೆಯೂ ಯಾವುದೇ ಕ್ರಮವನ್ನು ಕೈಗೊಂಡಿರುವುದಿಲ್ಲ. ನ್ಯಾಯಾಲಯವು ಈ ಬಗ್ಗೆ ಅಂತಿಮ ಆದೇಶ ನೀಡಿದ ನಂತರ ಅದರಂತೆ ಪರಿಶೀಲಿಸಿ, ಕ್ರಮ ಕೈಗೊಳ್ಳಲಾಗುವುದು |

**ಸಂಖ್ಯೆ: ನಅಇ 106 ಎಂಎನ್‌ಯು 2020**

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ